


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 05-03-2021 ಪ್ರಶ್ನೆ ಸಂಖ್ಯೆ : 619 (737)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 05-03-2021

ಉತ್ತರಿಸುವ ಸಚಿವರು: ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ವಿಷಯ : ಜಲಜೀವನ್ ಮಿಷನ್ ಯೋಜನೆಯ ಉದ್ದೇಶ ಹಾಗೂ ಕಾರ್ಯಗಳ ಕುರಿತು

(ಅ) ರಾಜ್ಯದಲ್ಲಿ ಗ್ರಾಮ ಪಂಚಾಯಿತಿಗಳಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ಕೇಂದ್ರ ಹಾಗೂ ರಾಜ್ಯ ಪುರಸ್ಕತ ಯೋಜನೆಗಳು ಯಾವುವು, ಪ್ರಸ್ತುತ ಪ್ರಾರಂಭಗೊಂಡಿರುವ ಜಲಜೀವನ್ ಮಿಷನ್ (ಜೆಜೆಎಮ್) ಯೋಜನೆಯ ಉದ್ದೇಶ ಹಾಗೂ ಕಾರ್ಯಗಳು, ಮಾರ್ಗಸೂಚಿಗಳು ಯಾವುವು ;

(ಆ) ಜಲಜೀವನ್ ಮಿಷನ್ (ಜೆಜೆಎಮ್) ಯೋಜನೆಯನ್ನು ರೂಪಿಸುವ ಪೂರ್ವದಲ್ಲಿ ನೀರಿನ ಮೂಲ ಮತ್ತು ಅವುಗಳ ಇಳುವರಿ ಸಾಮಥ್ರ್ಯದ ಕುರಿತು ತಾಂತ್ರಿಕ ಅಭಿಪ್ರಾಯವನ್ನು ಪಡೆಯಲಾಗಿದೆಯೇ ; ಇಲ್ಲವಾದಲ್ಲಿ, ಯೋಜನೆಯಿಂದ ಸಾರ್ವಜನಿಕ ಹಣದ ದುರುಪಯೋಗವಾದಂತಾಗುವುದನ್ನು ಸರ್ಕಾರ ಗಮನಿಸಿದೆಯೇ ;

(ಇ) ಈ ಯೋಜನೆಯಲ್ಲಿ ಕಾಮಗಾರಿಯ ಅಂದಾಜು ಮೊತ್ತದ ಶೇ. 10 ರಷ್ಟನ್ನು ಕಡ್ಡಾಯವಾಗಿ ಸಾರ್ವಜನಿಕರಿಂದ ವಂತಿಗೆ ಸಂಗ್ರಹಿಸುವ ನಿಬಂಧನೆ ಇರುವುದೇ ; ಒಂದು ವೇಳೆ ಸಾರ್ವಜನಿಕರು ವಂತಿಗೆ ನೀಡಲು ನಿರಾಕರಿಸಿದರೆ ಯೋಜನೆ ಸ್ಥಗಿತಗೊಳ್ಳುವುದೇ ; ಅಂತಹ ಸಂದರ್ಭದಲ್ಲಿ ಬದಲಿ ಅನುದಾನ ವ್ಯವಸ್ಥೆಯನ್ನು ಸರ್ಕಾರ ಮಾಡುವುದೇ ?